# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 826
ಸದಸ್ಯರ ಹೆಸರು : ಶ್ರೀ ಯು.ಬಿ. ವೆಂಕಟೇಶ್ (ನಾಮನಿರ್ದೇಶನ ಹೊಂದಿದವರು)
ಉತ್ತರಿಸಬೇಕಾದ ದಿನಾಂಕ : 09.03.2021.
ಉತ್ತರಿಸುವವರು : ಸಣ್ಣ ಕೈಗಾರಿಕೆ ಹಾಗೂ ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಸಚಿವರು.

| ಕ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ ಸಣ್ಣ ಸಣ್ಣ ಉದ್ಯಮಗಳನ್ನು ತೆರೆಯಲು ಅನುಸರಿಸಬೇಕಾದ ಮಾರ್ಗಸೂಚಿಗಳೇನು; | ರಾಜ್ಯದಲ್ಲಿ ಸಣ್ಣ ಸಣ್ಣ ಉದ್ಯಮಗಳನ್ನು ತೆರೆಯಲು ಉದ್ಯಮಶೀಲರು ಕನಿಷ್ಠ ಈ ಕೆಳಗಿನ ಮಾರ್ಗಸೂಚಿಯನ್ನು ಅನುಸರಿಸಬೇಕಾಗುತ್ತದೆ.<br>1. ಮಾಲೀಕತ್ವ ಉದ್ಯಮ ಸ್ಥಾಪಿಸಲು ಬಯಸುವ ಉದ್ಯಮಶೀಲರು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿ/ ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮದ ನಿವೇಶನದಲ್ಲಿ ಕೈಗಾರಿಕೆಯನ್ನು ಸ್ಥಾಪಿಸುವ ಉದ್ದೇಶವನ್ನು ಹೊಂದಿದಲ್ಲಿ "ಕಾಮನ್ ಅಪ್ಲಿಕೇಷನ್ ಫಾರಂ" ನ್ನು ಭರ್ತಿ ಮಾಡಿ ಅರ್ಜಿಯನ್ನು ಸಂಬಂಧಿಸಿದ ಜಂಟಿ ನಿರ್ದೇಶಕರು, ಜಿಲ್ಲಾ ಕೈಗಾರಿಕಾ ಕೇಂದ್ರಕ್ಕೆ ಸಲ್ಲಿಸಬೇಕಾಗುತ್ತದೆ.<br>2. ಜಿಲ್ಲಾ ಕೈಗಾರಿಕಾ ಕೇಂದ್ರವು ಈ ಪ್ರಸ್ತಾವನೆಯನ್ನು ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜರಗುವ "ಜಿಲ್ಲಾ ಮಟ್ಟದ ಏಕ ಗವಾಕ್ಷಿ ಸಮಿತಿ" ಸಭೆಯಲ್ಲಿ ಮಂಡಿಸಿ ಅನುಮೋದನೆ ಪಡೆದು ತಾತ್ವಿಕ ಅನುಮೋದನಾ ಪತ್ರವನ್ನು ಉದ್ಯಮಶೀಲರಿಗೆ ನೀಡುತ್ತದೆ.<br>3. ನಂತರ ಉದ್ಯಮಶೀಲರು ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಗೆ ನಿವೇಶನಕ್ಕೆ ಅರ್ಜಿ ಸಲ್ಲಿಸಿ ನಿವೇಶನವನ್ನು ಪಡೆಮಕೊಳ್ಳಬೇಕಾಗುತ್ತದೆ. ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮದ ನಿವೇಶನವಾದಲ್ಲಿ ಅದಕ್ಕೆ ಸಂಬಂಧಿಸಿದ ಸಮಿತಿಯು ನಿವೇಶನವನ್ನು ಹಂಚಿಕೆ ಮಾಡುತ್ತದೆ.<br>4. ಉದ್ಯಮಶೀಲರು ನಿವೇಶನದ ಹಂಚಿಕೆ ಆದ ನಂತರ ಯೋಜನೆಯ ಅನುಷ್ಠಾನಕ್ಕೆ ಅಗತ್ಯವಾದ ಹಣಕಾಸಿನ ನೆರವಿಗಾಗಿ ಬ್ಯಾಂಕ್/ ಕೆ.ಎಸ್.ಎಫ್.ಸಿ ಗೆ ಯೋಜನಾವರದಿ ಮತ್ತು ಇತರೆ ಅಗತ್ಯ ದಾಖಲೆಗಳನ್ನು ಸಲ್ಲಿಸಿ ಸಾಲ ಮಂಜೂರಾತಿಯನ್ನು ಪಡೆದುಕೊಳ್ಳಬೇಕಾಗುತ್ತದೆ.<br>5. ಕೈಗಾರಿಕಾ ಕಟ್ಟಡ ನಿರ್ಮಾಣಕ್ಕಾಗಿ ಕೆ.ಐ.ಎ.ಡಿ.ಬಿ/ ಕೆ.ಎಸ್.ಎಸ್.ಐ.ಡಿ.ಸಿ/ಸ್ಥಳೀಯ ಪ್ರಾಧಿಕಾರ ಯಿಂದ ನಕ್ಷೆ ಅನುಮೋದನೆ ಪಡೆದುಕೊಂಡು ಕಟ್ಟಡ ನಿರ್ಮಾಣ ಪ್ರಾರಂಭಿಸಬೇಕಾಗುತ್ತದೆ.<br>6. ಕೈಗಾರಿಕಾ ಚಟುವಟಿಕೆಯನ್ನು ಆಧರಿಸಿ ಕರ್ನಾಟಕ ರಾಜ್ಯ ಪರಿಸರ ಮಾಲಿನ್ಯ ನಿಯಂತ್ರಣ ಮಂಡಳಿಯಿಂದ "ಕನ್ಸೆಂಟ್ ಫಾರ್ ಎಸ್ಟಾಬ್ಲಿಷ್‌ಮೆಂಟ್" ಅನುಮತಿಯನ್ನು ಪಡೆಯಬೇಕಾಗುತ್ತದೆ.<br>7. ವಿದ್ಯುತ್ ಸಂಪರ್ಕಕ್ಕಾಗಿ ಸಂಬಂಧಿಸಿದ ಎಸ್ಕಾಂನಿಂದ ಮಂಜೂರಾತಿಯನ್ನು ಪಡೆಯಬೇಕಾಗುತ್ತದೆ.<br>8. ನೀರಿನ ಸಂಪರ್ಕಕ್ಕಾಗಿ ಸಂಬಂಧಿಸಿದ ಪ್ರಾಧಿಕಾರದಿಂದ ಅನುಮತಿಯನ್ನು ಪಡೆಯಬೇಕಾಗುತ್ತದೆ.<br>9. ಚಟುವಟಿಕೆ / ಯಂತ್ರೋಪಕರಣಗಳನ್ನು ಆಧರಿಸಿ "ಫ್ಯಾಕ್ಟರೀಸ್ ಮತ್ತು ಬಾಯ್ಲರ್" ಇಲಾಖೆಯಿಂದ ಅನುಮತಿ ಪಡೆಯಬೇಕಾಗುತ್ತದೆ.<br>10. ಕಾರ್ಮಿಕರ ಸಂಖ್ಯೆಯನ್ನು ಆಧರಿಸಿ ಕಾರ್ಮಿಕ ಇಲಾಖೆಯಿಂದ ಅನುಮೋದನೆ ಪಡೆದುಕೊಳ್ಳಬೇಕಾಗುತ್ತದೆ. |

| | | |
|---|---|---|
| | | 11. ಕಾರ್ಮಿಕರ ಸಂಖ್ಯೆ 20 ಕ್ಕೂ ಹೆಚ್ಚಾದಲ್ಲಿ ಇ.ಎಸ್.ಐ/ ಪಿ.ಎಫ್/ವೃತ್ತಿ ತೆರಿಗೆ ನೋಂದಣಿ ಪಡೆಯಬೇಕಾಗುತ್ತದೆ.<br>12. ಉದ್ದೇಶಿತ ಕೈಗಾರಿಕೆಯ ವಾರ್ಷಿಕ ವಹಿವಾಟು ರೂ.40 ಲಕ್ಷಕ್ಕಿಂತ ಹೆಚ್ಚಾಗುವುದಿದ್ದಲ್ಲಿ ವಾಣಿಜ್ಯ ತೆರಿಗೆ ಇಲಾಖೆಯಿಂದ "ಜಿ.ಎಸ್.ಟಿ" ನೋಂದಣಿ ಪಡೆಯಬೇಕಾಗುತ್ತದೆ.<br>13. ಆಹಾರ ಸಂಸ್ಕರಣಾ ಕೈಗಾರಿಕಾ ಚಟುವಟಿಕೆಯಾದಲ್ಲಿ "ಎಫ್.ಎಸ್.ಎಸ್.ಎ.ಐ" ರಹದಾರಿಯನ್ನು ಪಡೆಯಬೇಕಾಗುತ್ತದೆ.<br>14. ಅಪಾಯಕಾರಿ ಕೈಗಾರಿಕಾ ಚಟುವಟಿಕೆಯಾದಲ್ಲಿ "ಫೈರ್ ಸೇಫ್ಟಿ ಪ್ರಮಾಣಪತ್ರ"ವನ್ನು ಅಗ್ನಿಶಾಮಕ ಇಲಾಖೆಯಿಂದ ಪಡೆದುಕೊಳ್ಳಬೇಕಾಗುತ್ತದೆ.<br>15. ಕಟ್ಟಡ ನಿರ್ಮಾಣ, ಯಂತ್ರೋಪಕರಣಗಳ ಸ್ಥಾಪನೆಯಾದ ನಂತರ ಕೈಗಾರಿಕಾ ಚಟುವಟಿಕೆಯನ್ನು ಆಧರಿಸಿ ಕರ್ನಾಟಕ ರಾಜ್ಯ ಪರಿಸರ ಮಾಲಿನ್ಯ ನಿಯಂತ್ರಣ ಮಂಡಳಿಯಿಂದ "ಕನ್ಸೆಂಟ್ ಫಾರ್ ಆಪರೇಷನ್" ಅನುಮತಿಯನ್ನು ಪಡೆಯಬೇಕಾಗುತ್ತದೆ. |
| ಆ) | ಹತ್ತು ಹಲವು ಇಲಾಖೆಗಳಿಂದ ಅನುಮತಿ ಪತ್ರ ಪಡೆಯಲು ಉದ್ದಿಮೆದಾರರು ಅಲೆದಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಉದ್ಯಮಶೀಲರು ಕೈಗಾರಿಕಾ ಸ್ಥಾಪನೆಗೆ ಸಂಬಂಧಿಸಿದ ಪ್ರಾಧಿಕಾರಗಳಿಂದ ಅಗತ್ಯ ಅನುಮತಿ ಪಡೆಯಲು ವ್ಯವಹಾರ ಪ್ರಕ್ರಿಯೆಯನ್ನು ಸರಳಗೊಳಿಸಲಾಗುತ್ತಿದೆ. |
| ಇ) | ಬಂದಿದ್ದಲ್ಲಿ, ಈ ಕುರಿತು ಏಕಗವಾಕ್ಷಿ ಪದ್ಧತಿಯನ್ನು ಜಾರಿಗೊಳಿಸಿ ಉದ್ದಿಮೆದಾರರಿಗೆ ಅನುಕೂಲ ಒದಗಿಸಲಾಗುವುದೇ? | ಕರ್ನಾಟಕ ಸರ್ಕಾರವು ಬಂಡವಾಳ ಆಕರ್ಷಣೆ ಮತ್ತು ಹೂಡಿಕೆಯನ್ನು ಹೆಚ್ಚಿಸಲು ಕರ್ನಾಟಕದಲ್ಲಿ ವ್ಯವಹಾರವನ್ನು ಸರಳೀಕರಣಗೊಳಿಸಲು ಅನೇಕ ಸುಧಾರಣಾ ಕ್ರಮಗಳನ್ನು ತೆಗೆದುಕೊಳ್ಳುತ್ತಿದೆ.<br>ಪ್ರಸ್ತುತ ಕರ್ನಾಟಕ ಸರ್ಕಾರವು "ಅಫಿಡವಿಟ್ ಬೇಸಡ್ ಕ್ಲಿಯರೆನ್ಸ್" (ಎ.ಬಿ.ಸಿ) ಯೋಜನೆಯನ್ನು ಜಾರಿಗೆ ತಂದಿದ್ದು ಉದ್ಯಮಶೀಲರು ಕರ್ನಾಟಕ ಉದ್ಯೋಗ ಮಿತ್ರಕ್ಕೆ ಯೋಜನೆಯ ಪ್ರಸ್ತಾವನೆಯನ್ನು ಸಲ್ಲಿಸಿ ನಿಗದಿತ ಶುಲ್ಕವನ್ನು ಪಾವತಿಸಿ, ಅಫಿಡವಿಟ್ ಸಲ್ಲಿಸಿ ತಮ್ಮ ಯೋಜನೆ ಅನುಷ್ಠಾನಕ್ಕೆ ಅನುಮೋದನೆ ಪಡೆದು ಯೋಜನೆ ಅನುಷ್ಠಾನ ಕೈಗೊಂಡು ಉತ್ಪಾದನಾ / ಸೇವೆ ಚಟುವಟಿಕೆ ಪ್ರಾರಂಭಿಸಬಹುದು. 3 ವರ್ಷಗಳ ಅವಧಿಯಲ್ಲಿ ವಿವಿಧ ಇಲಾಖೆಗಳ ಅಗತ್ಯ ಅನುಮೋದನೆ ಪಡೆದುಕೊಳ್ಳಬೇಕಾಗುತ್ತದೆ.<br>ಇದೇ ರೀತಿಯಾಗಿ ಅನೇಕ ಸುಧಾರಣ ಕ್ರಮಗಳನ್ನು ಕೇಂದ್ರ ಸರ್ಕಾರದ ಮಾರ್ಗದರ್ಶನದಲ್ಲಿ ಕರ್ನಾಟಕ ಸರ್ಕಾರವು ತೆಗೆದುಕೊಳ್ಳುತ್ತಿದೆ. |

ಸಿಐ 17 ಸಿಎಸ್‌ಸಿ 2021

(ಸಿ.ಸಿ. ಪಾಟೀಲ್)
ಸಣ್ಣ ಕೈಗಾರಿಕೆ ಹಾಗೂ
ವಾರ್ತಾ ಮತ್ತು ಸಾರ್ವಜನಿಕ ಸಂಪರ್ಕ ಸಚಿವರು.